ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಬುಧವಾರ, ದಿನಾಂಕ: 09ನೇ ಡಿಸೆಂಬರ್, 2020

ಫಲಾನುಭವಿಗಳಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

166 (296) ಮಾನ್ಯ ವಸತಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಮಂಡ್ಯ ಜಿಲ್ಲೆಗೆ ಕಳೆದ ಐದು ವರ್ಷಗಳಲ್ಲಿ ವಿವಿಧ ವಸತಿ ಯೋಜನೆಗಳಡಿ ಎಷ್ಟು ಮನೆಗಳನ್ನು ನಿರ್ಮಿಸುವ ಗುರಿಯನ್ನು ಹೊಂದಿದೆ ; (ತಾಲ್ಲೂಕುವಾರು, ಗ್ರಾಮ ಪಂಚಾಯಿತಿವಾರು ಮಾಹಿತಿ ಒದಗಿಸುವುದು)

(ಆ) ಜಿಲ್ಲೆಗೆ ಮಂಜೂರು ಮಾಡಲಾದ ಮನೆಗಳನ್ನು ಸಂಖ್ಯೆಗೆ ಎದುರಾಗಿ ಗ್ರಾಮ ಪಂಚಾಯಿತಿಗಳು ಎಷ್ಟು ಫಲಾನುಭವಿಗಳನ್ನು ಆಯ್ಕೆ ಮಾಡಿರುತ್ತವೆ ; (ತಾಲ್ಲೂಕುವಾರು, ಗ್ರಾಮ ಪಂಚಾಯಿತಿವಾರು ಮಾಹಿತಿ ಒದಗಿಸುವುದು)

(ಇ) ಆಯ್ಕೆ ಮಾಡಲಾದ ಫಲಾನುಭವಿಗಳಿಗೆ ಹಣ ಬಿಡುಗಡೆ ಮಾಡಲಾಗಿದೆಯೇ ; ಮಾಡಿದ್ದಲ್ಲಿ, ಎಷ್ಟು ಹಣ ಬಿಡುಗಡೆ ಮಾಡಲಾಗಿದೆ ; (ತಾಲ್ಲೂಕುವಾರು, ಗ್ರಾಮ ಪಂಚಾಯಿತಿವಾರು ಮಾಹಿತಿ ಒದಗಿಸುವುದು)

(ಈ) ನಾಗಮಂಗಲ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಮದ್ದೂರು ತಾಲ್ಲೂಕಿನ ಗ್ರಾಮ ಪಂಚಾಯಿತಿಗಳ ಅನುದಾನ ಬಿಡುಗಡೆ ಸಂಬಂಧ ನಿಗಮದಿಂದ Vijil App ನಲ್ಲಿ ಆಯ್ಕೆ ಮಾಡಲಾಗಿರುವ ಫಲಾನುಭವಿಗಳ ಸಂಖ್ಯೆಗೆ ಎದುರಾಗಿ, ಗ್ರಾಮ ಪಂಚಾಯಿತಿಯು ಜಿಪಿಎಸ್ ಮಾಡಿರುವ ಫಲಾನುಭವಿಗಳ ಸಂಖ್ಯೆ ಎಷ್ಟು ; (ವಿವರಗಳನ್ನು ಫಲಾನುಭವಿವಾರು /ಪಂಚಾಯಿತಿವಾರು ಒದಗಿಸುವುದು)

(ಉ) ನಿಗಮವು ಫಲಾನುಭವಿಗಳನ್ನು Vijil App ನಲ್ಲಿ ಆಯ್ಕೆ ಮಾಡಿದ್ದರೂ ಸಹ ಗ್ರಾಮ ಪಂಚಾಯಿತಿಯು ನಿಗಧಿತ ಸಮಯದೊಳಗೆ ಜಿಪಿಎಸ್ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಜಿಪಿಎಸ್ ಮಾಡದಿರಲು ಕಾರಣವೇನು; ಇದರಿಂದಾಗಿ ಫಲಾನುಭವಿಗಳಿಗೆ ತೊಂದರೆಯಾಗುವುದಿಲ್ಲವೆ ; ನಿಗಧಿತ ಸಮಯದೊಳಗೆ ಜಿಪಿಎಸ್ ಮಾಡದ ಅಧಿಕಾರಿಗಳ ವಿರುದ್ದ ಯಾವ ಕ್ರಮ ಕೈಗೊಳ್ಳಲಾಗುವುದು? (ವಿವರ ಒದಗಿಸುವುದು)